# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಸ್. ವ್ಹಿ. ಸಂಕನೂರ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 983

ಉತ್ತರಿಸಬೇಕಾದ ದಿನಾಂಕ : 21.12.2021

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಮಹಿಳಾ ಮತ್ತು ಪುರುಷ ಸ್ವ-ಸಹಾಯ ಸಂಘಗಳು ಎಷ್ಟು; ಕಲಬುರಗಿ ಜಿಲ್ಲೆಯ ಅಫಜಲಪೂರ್ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿರುವ ಮಹಿಳಾ ಮತ್ತು ಪುರುಷ ಸ್ವ-ಸಹಾಯ ಸಂಘಗಳ ಬಗ್ಗೆ ಮಾಹಿತಿ ನೀಡುವುದು; ಕಳೆದ 2 ವರ್ಷಗಳಲ್ಲಿ ಈ ಗ್ರಾಮದಲ್ಲಿರುವ ಸ್ವ-ಸಹಾಯ ಸಂಘಗಳಿಗೆ ನೀಡಿದ ಸಹಾಯ ಧನ ಮತ್ತು ಸಾಲ ನೀಡಿದ ಹಾಗೂ ಫಲಾನುಭವಿಗಳ ವಿವರ ನಿಡುವುದು; | ದಿನಾಂಕ: 30-11-2021 ಕ್ಕೆ ಇದ್ದಂತೆ ರಾಜ್ಯದ ಸಹಕಾರ ಸಂಘಗಳಲ್ಲಿ 2,38,175 ಮಹಿಳಾ ಮತ್ತು ಪುರುಷ ಸ್ವ-ಸಹಾಯ ಸಂಘಗಳು ರಚನೆಯಾಗಿದ್ದು ಜಿಲ್ಲಾವಾರು ವಿವರವನ್ನು **ಅನುಬಂಧ 1** ರಲ್ಲಿ ನೀಡಲಾಗಿದೆ.<br><br>ಕಲಬುರಗಿ ಜಿಲ್ಲೆಯ ಅಫಜಲಪೂರ್ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿ ಸಹಕಾರ ಸಂಘ/ಡಿಸಿಸಿ ಬ್ಯಾಂಕಿನ ವ್ಯಾಪ್ತಿಯಲ್ಲಿ ಸ್ವ-ಸಹಾಯ ಸಂಘಗಳು ಇರುವದಿಲ್ಲ. ಆದ್ದರಿಂದ ಸಾಲ ಹಾಗೂ ಸಹಾಯಧನ ನೀಡಿರುವುದಿಲ್ಲ. |
| ಆ) | ಸ್ವ-ಸಹಾಯ ಸಂಘಗಳಿಂದ ಸಾಲ/ ಸಹಾಯಧನ ನೀಡಲು ಅನುಸರಿಸುವ ಅರ್ಹತಾ ಹಾಗೂ ಮಾನದಂಡಗಳೇನು? | ಸ್ವ-ಸಹಾಯ ಗುಂಪುಗಳಿಗೆ ಸಹಕಾರ ಬ್ಯಾಂಕ್‌ಗಳ ಮೂಲಕ ಮಹಿಳಾ ಸ್ವ-ಸಹಾಯ ಸಂಘಗಳಿಗೆ ರೂ.5.00 ಲಕ್ಷದವರೆಗಿನ ಸಾಲವನ್ನು ಶೂನ್ಯ ಮತ್ತು ಸ್ವ-ಉದ್ಯೋಗ ಕೈಗೊಳ್ಳಲು ರೂ.5.00 ಲಕ್ಷದಿಂದ ರೂ.10.00 ಲಕ್ಷಗಳ ವರೆಗಿನ ಸಾಲವನ್ನು ಶೇ.4 ರ ಬಡ್ಡಿದರದಲ್ಲಿ ಹಾಗೂ ಪುರುಷ ಸ್ವ-ಸಹಾಯ ಸಂಘಗಳಿಗೆ ಶೇ.4 ರ ಬಡ್ಡಿದರದಲ್ಲಿ ಸಾಲ ವಿತರಿಸಲಾಗುತ್ತಿದೆ.<br>ಯೋಜನೆಯಲ್ಲಿ ಅನುಸರಿಸುತ್ತಿರುವ ಅರ್ಹತಾ ಹಾಗೂ ಮಾನದಂಡಗಳು ಈ ಕೆಳಗಿನಂತಿರುತ್ತವೆ.<br>1. ಗುಂಪಿನ ಸದಸ್ಯರ ಸಂಖ್ಯೆ ಕನಿಷ್ಟ 10 ಮತ್ತು ಗರಿಷ್ಟ 20 ಕ್ಕೆ ಮೀರಬಾರದು. ಸದಸ್ಯರ ವಯೋಮಿತಿಯು 18 ರಿಂದ 60 ವರ್ಷದೊಳಗಿರಬೇಕು.<br>2. ಸ್ವ-ಸಹಾಯ ಗುಂಪಿನ ಉಳಿತಾಯ/ಚಾಲ್ತಿ ಖಾತೆಯನ್ನು ಡಿಸಿಸಿ ಬ್ಯಾಂಕಿನ ಶಾಖಾ ಕಚೇರಿಗಳಲ್ಲಿ ತೆರೆಯಬೇಕು.<br>3. ಗುಂಪಿನ ಮಟ್ಟದಲ್ಲಿ ಪ್ರತಿನಿಧಿ-1, ಪ್ರತಿನಿಧಿ-2, ಅಂತಾ ನೇಮಿಸಿಕೊಂಡು ಪ್ರತಿನಿಧಿಗಳ ಬ್ಯಾಂಕಿನ ಖಾತೆಯ ಮೇಲೆ ವ್ಯವಹರಿಸತಕ್ಕದ್ದು. |

| | | |
|---|---|---|
| | | 4. ಗುಂಪಿನ ಸದಸ್ಯರು ಸಭೆಯನ್ನು ಪ್ರತಿ ವಾರಕ್ಕೆ ಅಥವಾ ಕನಿಷ್ಠ 15 ದಿವಸಗಳಿಗೊಮ್ಮೆ ಜರುಗುವಂತೆ ಹಾಗೂ ಸದಸ್ಯರೆಲ್ಲರೂ ಕಡ್ಡಾಯವಾಗಿ ಸಭೆಯಲ್ಲಿ ಪಾಲ್ಗೊಳ್ಳುವಂತೆ ನೋಡಿಕೊಳ್ಳತಕ್ಕದ್ದು. ಹಾಗೂ ಉಳಿತಾಯವನ್ನು ಮಾಡತಕ್ಕದ್ದು.<br>5. ಗುಂಪು ಪ್ರಾರಂಭವಾದ 6 ತಿಂಗಳ ನಂತರ ಸಾಲವನ್ನು ನೀಡಲಾಗುತ್ತದೆ<br>6. ಮೊದಲನೆ ಬಾರಿಗೆ ಸಾಮಾಜಿಕ ಬಳಕೆಗೆ ಸಾಲ ನೀಡುವಾಗ ಗುಂಪಿನ ಆಂತರಿಕ ಬಂಡವಾಳದಷ್ಟೇ ಪ್ರಮಾಣದ ಸಾಲ, ಎರಡನೇ ಸಲ ಸಾಲ ವಿತರಿಸುವಾಗ ಆಂತರಿಕ ಬಂಡವಾಳದ ಎರಡರಷ್ಟು ಮೂರನೇ ಬಾರಿಗೆ ಸ್ವಂತ ಉದ್ಯೋಗವನ್ನು ಕಲ್ಪಿಸಲು ಮೈಕ್ರೋ ಕ್ರೆಡಿಟ್ ಪ್ಲಾನ್ ರೂಪಿಸಿ ಅದರನ್ವಯ ಸಾಲದ ಮಿತಿಯನ್ನು ನಿಗದಿಪಡಿಸಲಾಗುವುದು.<br>7. ಸರ್ಕಾರದ ಬಡ್ಡಿ ಸಹಾಯ ಧನ ಪಡೆಯಲು ಸ್ವ ಸಹಾಯ ಗುಂಪುಗಳು ನಿಗದಿತ ಅವಧಿಯಲ್ಲಿ ಸಾಲವನ್ನು ಮರುಪಾವತಿಸಬೇಕು. |

**ಸಂಖ್ಯೆ: ಸಿಒ 382 ಸಿಎಲ್‌ಎಸ್ 2021**

(ಎಸ್.ಟಿ. ಸೋಮಶೇಖರ್)

**ಸಹಕಾರ ಸಚಿವರು**

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಸ್. ವ್ಹಿ. ಸಂಕನೂರ (ಪದವೀದರರ ಕ್ಷೇತ್ರ) ಇವರು ಪ್ರಶ್ನೆ ಸಂಖ್ಯೆ 847 (983) ಕ್ಕೆ ಅನುಬಂಧ-1

| ಕ್ರ ಸಂ | ಜಿಲ್ಲೆಯ ಹೆಸರು | ಮಹಿಳಾ ಸ್ವ ಸಹಾಯ ಗುಂಪುಗಳ ಸಂಖ್ಯೆ | ಪುರುಷ ಸ್ವ ಸಹಾಯ ಗುಂಪುಗಳ ಸಂಖ್ಯೆ | ಒಟ್ಟು ಸಹಾಯ ಗುಂಪುಗಳ ಸಂಖ್ಯೆ |
|---|---|---|---|---|
| 1 | ಬೆಳಗಾವಿ | 21160 | 4076 | 25236 |
| 2 | ವಿಜಯಪುರ | 8173 | 1322 | 9495 |
| 3 | ಬಾಗಲಕೋಟೆ | 2654 | 10 | 2664 |
| 4 | ಧಾರವಾಡ | 4577 | 266 | 4843 |
| 5 | ಗದಗ | 2824 | 403 | 3227 |
| 6 | ಹಾವೇರಿ | 2243 | 151 | 2394 |
| 7 | ಉತ್ತರ ಕನ್ನಡ | 7026 | 1345 | 8371 |
| 8 | ಬಳ್ಳಾರಿ | 735 | 14 | 749 |
| 9 | ಬೀದರ | 31578 | 399 | 31977 |
| 10 | ಕಲಬುರಗಿ | 401 | 0 | 401 |
| 11 | ಯಾದಗಿರ | 235 | 0 | 235 |
| 12 | ರಾಯಚೂರು | 5750 | 4 | 5754 |
| 13 | ಕೊಪ್ಪಳ | 2498 | 3 | 2501 |
| 14 | ಮೈಸೂರು | 6278 | 330 | 6608 |
| 15 | ಚಾಮರಾಜನಗರ | 1259 | 66 | 1325 |
| 16 | ಮಂಡ್ಯ | 22926 | 892 | 23818 |
| 17 | ಹಾಸನ | 14662 | 2064 | 16726 |
| 18 | ಚಿಕ್ಕಮಗಳೂರು | 11276 | 302 | 11578 |
| 19 | ಕೊಡಗು | 5315 | 1246 | 6561 |
| 20 | ದಕ್ಷಿಣ ಕನ್ನಡ | 13739 | 5632 | 19371 |
| 21 | ಉಡುಪಿ | 9935 | 3575 | 13510 |
| 22 | ಬೆಂಗಳೂರು ನಗರ | 666 | 0 | 666 |
| 23 | ಬೆಂ.ಗ್ರಾಮಾಂತರ | 981 | 0 | 981 |
| 24 | ರಾಮನಗರ | 2377 | 65 | 2442 |
| 25 | ಕೋಲಾರ | 12513 | 41 | 12554 |
| 26 | ಚಿಕ್ಕಬಳ್ಳಾಪುರ | 7687 | 3 | 7690 |
| 27 | ತುಮಕೂರು | 5362 | 173 | 5535 |
| 28 | ಚಿತ್ರದುರ್ಗ | 372 | 10 | 382 |
| 29 | ದಾವಣಗೆರೆ | 3054 | 160 | 3214 |
| 30 | ಶಿವಮೊಗ್ಗ | 6086 | 1281 | 7367 |
|  | ಒಟ್ಟು | **214342** | **23833** | **238175** |

L Sanda

ಸಹಕಾರ ಸಂಘಗಳ ಅಪರ ನಿಬಂಧಕರು ಪ್ರಭಾಗಿ

(ಪತ್ತು)